# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 2224

ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 31.03.2020

ಉತ್ತರಿಸುವವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ | Answers |
|---|---|---|---|
| ಅ) | ರಾಜ್ಯದಲ್ಲಿ ಈಗಾಗಲೇ ಹಲವಾರು ಬೃಹತ್ ಉದ್ದಿಮೆಗಳನ್ನು ಸ್ಥಾಪಿಸಲಾಗಿದ್ದು, ವಿದೇಶೀ ನೇರ ಬಂಡವಾಳ ಹೂಡಿಕೆಗಳ ಮುಖಾಂತರ ಹಲವಾರು ಬೃಹತ್ ಉದ್ದಿಮೆಗಳನ್ನು ಬೆಂಗಳೂರಿನ ಸುತ್ತಮುತ್ತ ಸರ್ಕಾರ ಸ್ಥಾಪಿಸುತ್ತಿರುವ ಕಾರಣ ಗ್ರಾಮೀಣ ಗುಡಿ ಕೈಗಾರಿಕೆಗಳು ಮೂಲೆಗುಂಪಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಿ ಸ್ಪರ್ಧಾತ್ಮಕ ಬೆಳವಣಿಗೆಯಿಂದಾಗಿ ಗ್ರಾಮೀಣ ಕರಕುಶಲ ಕೈಗಾರಿಕೆಗಳು ಹಿನ್ನಡೆ ಎದುರಿಸುತ್ತಿವೆ. | Rural Artisans Industries have been facing setback due to competitive development of International market. |
| ಆ) | ದೇಶದ ಬೆನ್ನೆಲುಬು ಕೃಷಿ ಹಾಗೂ ಸಣ್ಣ ಕೈಗಾರಿಕೆ ಹೀಗಿದ್ದಾಗ್ಯೂ ಗುಡಿ ಕೈಗಾರಿಕೆಗಳ ಅಭಿವೃದ್ಧಿಗೆ ಸರ್ಕಾರ ಹೆಚ್ಚಿನ ಒತ್ತು ನೀಡದಿರಲು ಕಾರಣವೇನು; | ಸರ್ಕಾರದಿಂದ ಕುಶಲಕರ್ಮಿಗಳ ಅಭಿವೃದ್ಧಿಗಾಗಿ ಸಾಕಷ್ಟು ಒತ್ತು ನೀಡಿದ್ದು, ಹಲವು ಯೋಜನೆಗಳನ್ನು ರೂಪಿಸಿದೆ. ಅವುಗಳೆಂದರೆ, ಕಚ್ಚಾ ವಸ್ತುವನ್ನು ರಿಯಾಯಿತಿ ದರದಲ್ಲಿ ಹಂಚಿಕೆ ಮಾಡುವುದು, ಮಾರುಕಟ್ಟೆ ಸೌಲಭ್ಯ ಒದಗಿಸುವುದು, ರಾಷ್ಟ್ರ ಮತ್ತು ರಾಜ್ಯ ಮಟ್ಟದಲ್ಲಿ ಜರುಗುವ ವಸ್ತು ಪ್ರದರ್ಶನಗಳಲ್ಲಿ ಕುಶಲಕರ್ಮಿಗಳು ಭಾಗವಹಿಸಲು ನೆರವು ನೀಡುವುದು, ಕಲ್ಯಾಣಾಭಿವೃದ್ಧಿ ಕಾರ್ಯಕ್ರಮ, ವಿವಿಧ ಯೋಜನೆಗಳಡಿ ವಸತಿ ಕಾರ್ಯಾಗಾರಗಳನ್ನು | Government has been extending various schemes for the development of artisans through Karnataka State Handicrafts Corporation Ltd., namely supplying raw materials at subsidized rates for sandalwood marketing support, assistance to participate in exhibition at State and National Level, Welfare Schemes, Living-cum-Worksheds have been provided under different schemes. |

| | | | |
|---|---|---|---|
| | | ಹಂಚಿಕೆ ಮಾಡಲಾಗಿದೆ.<br><br>ಸರ್ಕಾರದ ವತಿಯಿಂದ ಈಗಾಗಲೇ, ಸಾಗರ, ಸೊರಬ, ಕುಮಟ, ಶಿರಸಿ, ನವಲಗುಂದ್, ಮೈಸೂರು, ಚನ್ನಪಟ್ಟಣ ಮತ್ತು ಬೀದರ್‌ನಲ್ಲಿ ಕಲಾ ಸಂಕೀರ್ಣಗಳನ್ನು ಸ್ಥಾಪಿಸಲಾಗಿದ್ದು, ಈ ಕಲಾ ಸಂಕೀರ್ಣಗಳಲ್ಲಿ ಸಾಮಾನ್ಯ ಸೌಲಭ್ಯ ಕೇಂದ್ರಗಳನ್ನು ಸಹ ಸ್ಥಾಪಿಸಲಾಗಿದ್ದು, ಇವುಗಳಲ್ಲಿ ಯಂತ್ರೋಪಕರಣ ಹಾಗೂ ಉಪಕರಣಗಳನ್ನು ಅಳವಡಿಸಲಾಗಿದ್ದು, ಈ ಸೌಲಭ್ಯವನ್ನು ನಿಗಮದೊಂದಿಗೆ ನೋಂದಾಯಿತ / ನೋಂದಾಯಿಸಿಲ್ಲದ ಕುಶಲಕರ್ಮಿಗಳು ಉಪಯೋಗಿಸುತ್ತಿದ್ದಾರೆ. | Government has established Craft complexes in Sagar, Soraba, Kumata, Sirsi, Navalgund, Mysore, Channapatna & Bidar. Common Facility Centres have been established in these complexes by installing machineries and tools. These CFC's are used by Registered / Un-registered Artisans. |
| ಇ) | ಗುಡಿ ಕೈಗಾರಿಕೆಗಳಿಂದ ಗ್ರಾಮೀಣ ಭಾಗದ ಕಚ್ಚಾ ವಸ್ತುಗಳ ಸದುಪಯೋಗ ಹಾಗೂ ಆ ಭಾಗದಲ್ಲಿನ ನುರಿತ ಕೆಲಸಗಾರರಿಗೆ (Skilled Workers) ಉದ್ಯೋಗಾವಕಾಶವೂ ಲಭಿಸಿ, ಬೆಂಗಳೂರಿನಂತಹ ಪಟ್ಟಣಗಳಿಗೆ ಒತ್ತಡ ಕಡಿಮೆಯಾಗುವುದಲ್ಲದೇ ಗ್ರಾಮೀಣ ಉದ್ದಿಮೆಗಳಿಗೆ ಒತ್ತು ಕೊಡುವುದರೊಂದಿಗೆ ಸಮಗ್ರ ಬೆಳವಣಿಗೆಯೂ ಆಗುವುದರ ಬಗ್ಗೆ ಸರ್ಕಾರ ಹಾಕಿಕೊಂಡಿರುವ ಯೋಜನೆಗಳು ಯಾವುವು? | ಸರ್ಕಾರವು, ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮದ ಮುಖಾಂತರ ಕುಶಲಕರ್ಮಿಗಳು ತಯಾರಿಸುವ ಕಲೆ/ಉತ್ಪನ್ನಗಳನ್ನು ಉತ್ತೇಜಿಸಲು ಹಾಗೂ ಪಾರಂಪರಿಕ ಸ್ಥಳೀಯ ಕಲೆಗಳನ್ನು ಮುಂದುವರಿಸಲು ಶ್ರೀಗಂಧದ ಕೆತ್ತನೆ, ಬೀಟೆ ಮರ, ಬೀಟೆ ಮರದ ಇನ್ಲೇ ಕಲಾಕೃತಿಗಳು, ಬಿದರಿ ಕಲಾಕೃತಿಗಳು, ಕಿನ್ನಾಳದ ಬೊಂಬೆಗಳು, ನವಲಗುಂದದ ಜಮಖಾನ ಮುಂತಾದ ಕರಕುಶಲ ವಸ್ತುಗಳನ್ನು ಕುಶಲಕರ್ಮಿಗಳಿಂದ ಖರೀದಿಸಿ, ನಿಗಮದ ಮಾರಾಟ ಮಳಿಗೆಗಳ ಮುಖಾಂತರ ಮಾರಾಟ ಮಾಡಿ, ಮಾರುಕಟ್ಟೆ ಸೌಲಭ್ಯ ಒದಗಿಸುತ್ತಿದೆ.<br><br>ಮುಂದುವರೆದು, ಶ್ರೀಗಂಧದ ಕುಶಲಕರ್ಮಿಗಳಿಗೆ ಶ್ರೀಗಂಧದ ಮರವನ್ನು ಶೇ. 50 ರ ರಿಯಾಯಿತಿ ದರದಲ್ಲಿ ವಿತರಿಸಲಾಗುತ್ತಿದೆ.<br><br>ಬಿದರಿ ಕುಶಲಕರ್ಮಿಗಳಿಗೆ ಶೇ. 50 ರ ರಿಯಾಯಿತಿ | Government through Karnataka State Handicrafts Development Corporation Ltd., has been promoting the artisans involved in crafts / manufacturing and marketing assistance for the traditional crafts like Sandal wood carvings, Rosewood articles, Rose wood inlay works, Bidariware, Kinal Toys, Navalgund Carpets is provided by procuring the items from the artisans and sold through the showrooms of the corporation.<br><br>Sandal Wood raw material is provided to Sandal wood artisans registered with the corporation @ 50% rebate.<br><br>For Bidariware artisans raw material like Silver and Zinc is provided at 50% rebate.<br><br>Crafts like Bidariware, Mundagod Carpets, Kinal Toys, Navalgund Carpets are classified as lesser known craft and to promote the sales 20% rebate is being extended for the customer. |

| | | | |
|---|---|---|---|
| | | ದರದಲ್ಲಿ ಬೆಳ್ಳಿ ಮತ್ತು ಸತುವನ್ನು ವಿತರಿಸಲಾಗುತ್ತಿದೆ. ಅಲ್ಪಪರಿಚಿತ ವಸ್ತುಗಳಾದ ಬಿದರಿ ಕಲಾಕೃತಿಗಳು, ಮುಂಡುಗೋಡಿನ ರತ್ನಗಂಬಳಿಗಳು, ಕಿನ್ನಾಳದ ಗೊಂಬೆಗಳು ಮತ್ತು ನವಲಗುಂದದ ಜಮಖಾನಗಳಿಗೆ ಮಾರಾಟವನ್ನು ಉತ್ತೇಜಿಸಲು ಶೇ. 20 ರಷ್ಟು ರಿಯಾಯಿತಿಯನ್ನು ಗ್ರಾಹಕರಿಗೆ ನೀಡಲಾಗುತ್ತಿದೆ. | |

**ಸಿಐ 61 ಸಿಎಸ್‌ಸಿ 2020**

*(ಜಗದೀಶ ಶೆಟ್ಟರ)*
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು